# ಕಾನನ

ನಿಸರ್ಗದೆಡೆಗೆ ಪಯಣ



ಆಗಸ್ಟ್–2022

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ವಿಪಿನ್ ಬಾಳಿಗಾ ಬಿ. ಎಸ್.

**ಪರಿಷ್ಕರಣೆ**

ಮುರಳಿ ಎಸ್.

ಡಾ. ಮಧುಸೂಧನ ಹೆಚ್. ಸಿ.

**ಕರಡು ತಿದ್ದುಪಡಿ**

ಡಾ.ದೀಪಕ್ ಭ., ಮೈಸೂರು




# ಸಗಡೆ ಮರ

**ಸಾಮಾನ್ಯ ಹೆಸರು: Ceylon Oak**

**ವೈಜ್ಞಾನಿಕ ಹೆಸರು: *Schleichera oleosa***



**© ನಾಗೇಶ್ ಓ. ಎಸ್.** **ಸಗಡೆ ಮರ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ**

ಭಾರತ-ಶ್ರೀಲಂಕಾ ಮೊದಲಾದ ದೇಶಗಳ ಎಲೆ ಉದುರುವ ಕಾಡುಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಸಗಡೆ ಮರವು ಸುಮಾರು ಹತ್ತು ಮೀಟರ್ ಎತ್ತರಕ್ಕೆ ಬೆಳೆಯುತ್ತದೆ. ಮರದ ತೊಗಟೆಯು ತಿಳಿ ಬೂದು ಬಣ್ಣದಿಂದ ಕೂಡಿದ್ದು, ಎಲೆಗಳು ಸಂಯುಕ್ತ ವಿನ್ಯಾಸವನ್ನು ಹೊಂದಿವೆ. ಚಿಗುರೆಲೆಗಳು ಕಡುಗೆಂಪು ಬಣ್ಣದಲ್ಲಿರುವುದರಿಂದ ಸಗಡೆ ಮರವನ್ನು ಸುಲಭವಾಗಿ ಗುರುತಿಸಬಹುದು. ವರ್ಷದ ಮಾರ್ಚ್-ಏಪ್ರಿಲ್ ತಿಂಗಳುಗಳಲ್ಲಿ ಹಸಿರು ಮಿಶ್ರಿತ ಹಳದಿ ಬಣ್ಣದ ಹೂಗಳನ್ನು ಬಿಡುತ್ತದೆ. ಹೂಗಳು ಗೊಂಚಲುಗಳಲ್ಲಿದ್ದು (infloresence), ಚಿಕ್ಕದಾಗಿ ಸುಮಾರು ಒಂದು ಸೆಂಟಿಮೀಟರ್ ಗಿಂತ ಕಡಿಮೆ ಗಾತ್ರದಲ್ಲಿರುತ್ತವೆ. ಮರದ ಹಣ್ಣುಗಳು ಕಂದು ಬಣ್ಣದ ಹೆಬ್ಬೆರಳು ಗಾತ್ರದಲ್ಲಿದ್ದು, ಹಣ್ಣಿನ ತೊಗಟೆಯ ಮೇಲೆ ಮುಳ್ಳಿನಂತಹ ಆಕಾರವನ್ನು ನೋಡಬಹುದು. ಹಣ್ಣಿನ ಒಳಗೆ ತಿಳಿಹಸಿರು-ಹಳದಿಯ ತಿರುಳು ಇದ್ದು ತಿನ್ನಲು ಹುಳಿ ಮತ್ತು ಒಗರಿನಿಂದ ಕೂಡಿದ್ದು, ಇದರ ಒಳಗೆ ಒಂದು ಅಥವಾ ಎರಡು ಬೀಜಗಳಿರುತ್ತವೆ. ಮರದ ಹಣ್ಣುಗಳನ್ನು ಕೋತಿ, ಜಿಂಕೆ, ಆನೆ ಇನ್ನಿತರ ಪ್ರಾಣಿಗಳು ತಿನ್ನುತ್ತವೆ. ಈ ಮರದ ತೊಗಟೆಯನ್ನು ಆಯುರ್ವೇದ ಔಷಧಿ ತಯಾರಿಸಲು ಬಳಸುತ್ತಾರೆ. ಈ ಮರದ ಬೀಜಗಳಿಂದ ಎಣ್ಣೆಯನ್ನು ತೆಗೆಯುತ್ತಾರೆ.




# ಮರಿ ಬುಲ್ ಬುಲ್ ಪಕ್ಷಿಗೆ ಅಪ್ಪ ಅವ್ವ ಕಾವಲುಗಾರರು...

ಸಮಯ ಬೆಳಿಗ್ಗೆ ಒಂಬತ್ತು ಒಂಬತ್ತುವರೆ ಆಗಿತ್ತು. ಮನೆಯಲ್ಲಿ ನಾಷ್ಟ ಮುಗಿಸಿ ಕೈ ತೊಳೆಯುವುದಕ್ಕೆ ತಟ್ಟೆ ಹಿಡಿದು ಬಾಗಿಲು ತೆಗೆದು ಹೊರ ಬಂದ ನನಗೆ ಅಚ್ಚರಿ ಕಾಯ್ದಿತ್ತು. ಒಂದು ಸುಂದರ ಪಕ್ಷಿಯು ನನ್ನ ಅಂಬಾರಿಯಾದ ಸೈಕಲಿನ ಮೇಲೆ ಕುಳಿತು ಗಡಿಬಿಡಿಯಲ್ಲಿ ಕತ್ತನ್ನು ಅತ್ತಿಂದ ಇತ್ತ, ಇತ್ತಿಂದ ಅತ್ತ ಹೊರಳಾಡಿಸುತ್ತಿತ್ತು. ಇದರ ಹೊರಳಾಟದಲ್ಲಿ ಅದರ ನೆತ್ತಿಯ ಮೇಲೆ ಇರುವ ಜುಟ್ಟು ನೃತ್ಯ ಮಾಡುತ್ತಿತ್ತು. ಕಣ್ಣಿನ ಅಂಚಲ್ಲಿ ಕಾಡಿಗೆಯಂತೆ ಕಾಣುವ ಕೆಂಪು ಬಣ್ಣದ ಚುಕ್ಕೆಯನ್ನು ಇಟ್ಟುಕೊಂಡಿತ್ತು. ಎದೆಯ ಭಾಗ ಬಿಳಿ ಬಣ್ಣ, ಬೀಸಣಿಕೆಯಂತಹ ಬಾಲದ ಕೆಳಗೆ ಕೆಂಪು ಬಣ್ಣ, ದೇಹದ ಉಳಿದ ಭಾಗಗಳಲ್ಲಿ ಕಂದು ಬಣ್ಣದಿಂದ ಕೂಡಿದ್ದ ಈ ಪಕ್ಷಿಯನ್ನು ಕಂಡೊಡನೆಯೇ ಇದು ಕೆಂಪು ಮೀಸೆಯ ಪಿಕಳಾರ ಎಂದು ತಿಳಿಯುವುದರಲ್ಲಿ ನನಗೆ ಹೆಚ್ಚು ಸಮಯ ಹಿಡಿಯಲಿಲ್ಲ.

ಸುಮಾರು ತಿಂಗಳುಗಳ ಹಿಂದೆ ನಮ್ಮ ಕಛೇರಿಯ ಬಾಜು ಇದ್ದ ಮನೆಯ ಮಾಳಿಗೆಗೆ ಸುರುಳಿ ಸುತ್ತಿ ನೇತು ಬಿದ್ದಿದ್ದ ತಂತಿಯಲ್ಲಿ ಪಿಕಳಾರ (ಬುಲ್ ಬುಲ್) ದಂಪತಿಗಳು ಹುಲ್ಲು ಕಡ್ಡಿಯಿಂದ ಹೆಣಿಗೆ ಮಾಡುತ್ತಿರುವುದನ್ನು ನಾನು ಅಂದು ಗಮನಿಸುತ್ತಿದ್ದೆ. ನನ್ನ ಸೈಕಲಿನ ಮೇಲೆ ಇಂದು ಪಿಕಳಾರವನ್ನು ಕಂಡ ನನಗೆ ಆ ಸನ್ನಿವೇಶವು ನೆನೆಪಿಗೆ ಬಂತು. ಅಂದು ಕಂಡ ಪಿಕಳಾರ ಇದೇ ಇರಬಹುದೇ ಎಂಬ ಪ್ರಶ್ನೆ ತಲೆಗೆ ಬಂತು.

ಅಷ್ಟು ಹತ್ತಿರದಲ್ಲಿಯೇ ಪಕ್ಷಿಯನ್ನು ಕಂಡ ನಾನು ಖುಷಿಯಿಂದ ಫೋಟೋ ಕ್ಲಿಕ್ಕಿಸುವ ಯೋಚನೆಯಿಂದ ಕೈಯಲ್ಲಿದ್ದ ತಾಟನ್ನು ಕೆಳಗೆ ಇಟ್ಟು, ಮನೆಯೊಳಗಿಂದ ಮೊಬೈಲ್ ತರಲು ಹೊರಟೆ. ಬರುವಷ್ಟರೊಳಗೆ ಆ ಪಕ್ಷಿಯು ಅಲ್ಲಿಂದ ಹಾರಿ ಹೋಗಿತ್ತು. ಸುತ್ತಮುತ್ತ ಕಣ್ಣು ಹಾಯಿಸಿದೆ, ಎಲ್ಲೂ ಕಾಣಲಿಲ್ಲ. ಎಲ್ಲೋ ಹೋಯಿತೆಂದು ಕೆಳಗೆ ಇಟ್ಟಿದ್ದ ತಾಟನ್ನು ತೆಗೆದುಕೊಳ್ಳುವುದಕ್ಕೆ ತಿರುಗಿ ಒಂದೆರಡು ಹೆಜ್ಜೆ ಇಟ್ಟಾಗ, ಸಣ್ಣನೆಯ ದನಿಯಲ್ಲಿ ಚುಚ್....

ಚುಚ್.... ಎಂದು ಕೂಗುತ್ತಿರುವುದು ಕೇಳಿಸಿತು. ಕುತೂಹಲದಿಂದ ತಿರುಗಿ ನೋಡಿದೆ. ಕಾಲುಗಳನ್ನು ಒಂದಕ್ಕೊಂದು ಜೋಡಿಸಿಕೊಂಡು ಅಲುಗಾಡದೆ ಬೆದರಿ ಮೈಯನ್ನು ಗುತ್ತಗ ಮಾಡಿಕೊಂಡು ಒಂದಿಂಚೂ ಅಲುಗಾಡದೆ ಚಂದದ ಪಿಕಳಾರ ಪಕ್ಷಿಮರಿ ಕುಳಿತಿತ್ತು. ಕುಳಿತಲ್ಲಿಯೇ ತನ್ನ ಮೂತಿಯನ್ನು ಸುತ್ತಲು ಹೊರಳಾಡಿಸಿ ನೋಡುತ್ತಿತ್ತು.


© ಶರಣಪ್ಪ ಎಚ್. ಸಂಗನಾಳ

ನಾನು ಹತ್ತಿರ ಹೋಗಿ ಮೊಬೈಲಿನಲ್ಲಿ ಅದರ ಚಂದವನ್ನು ಸೆರೆಹಿಡಿಯುವಷ್ಟರಲ್ಲಿಯೇ ಆ ಮರಿಯ ಅಪ್ಪ ಅವ್ವ ಎರಡೂ ನನ್ನ ಮೇಲೆ ಯುದ್ಧ ಮಾಡುಲು ಮೇಲೆರಗಿ ತಲೆಗೆ ಕುಕ್ಕಲು ಶುರುಮಾಡಿದವು. ಅವುಗಳ ಚೂಪನೆಯ ಕೊಕ್ಕಿಗೆ ಹೆದರಿದ ನಾನು ಕೈಯಲ್ಲಿರುವ ಮೊಬೈಲ್ ಅನ್ನು ಬಿಟ್ಟು ತಲೆ ತಿಕ್ಕುತ್ತಾ ಎದ್ದು ಓಡಿದೆ. "ಸುಮ್ನ ನಿಂತ್ಗಂಡು ನೋಡೋದು ಬಿಟ್ಟು, ಗ್ವಾಡಿಮ್ಯಾಗ ಹೋಗು ಇರುವಿನ ಚಡ್ಯಾಗ ಬಿಡ್ಕೊಂಡಂಗಾತು" ನನ್ನ ಪರಿಸ್ಥಿತಿ.


© ಅನುಪಮಾ ಹೆಚ್. ಎಂ.

ಚಂಡು ಎತ್ತಿ ನೋಡಿದೆ. ಆ ಮರಿಯ ಅಪ್ಪ ಅವ್ವ ನನ್ನ ಕಡೆಗೆ ದುರುಗುಟ್ಟಿಸಿಕೊಂಡು ನೋಡ್ತಿದ್ವು. ಇವೆರಡೂ ಈ ಮರಿಯ ಕಾವಲುಗಾರರೆಂದು ತಿಳಿಯಿತು. ಆ ಮರಿಯನ್ನು ನೋಡಿದೆ, ರೆಕ್ಕೆ ಬಿಚ್ಚಿ ಮುಂದೆ ಹೊರಟಿತ್ತು. ಪಾಪ ಮರಿಗೆ ನೀರಡಿಕೆ ಆಗಿರಬಹುದು ಸ್ವಲ್ಪ ನೀರುಣಿಸಬಹುದಿತ್ತು ಎಂದೆನಿಸಿದರೂ ಅದರ ಅಪ್ಪ ಅವ್ವನಿಗೆ ಹೆದರಿ ನಾನು ಆಗಲೇ ಕೆಳಗೆ ಇಟ್ಟಿದ್ದ ತಾಟನ್ನು ತಗೊಂಡು, ಸುಮ್ಮನೆ ತೊಳೆಯೋಕೆ ಹೋದೆ.

ಸ್ವಲ್ಪ ಹೊತ್ತಿನ ನಂತರ ಆ ಮರಿ ಅಲ್ಲಿಯೇ ಇದೆಯೋ ಇಲ್ಲವೋ ಎಂಬ ಕುತೂಹಲದಿಂದ ಮತ್ತೆ ಇಣುಕಿ ನೋಡಿದೆ. ಆ ಮರಿಯು ಆ ಜಾಗದಲ್ಲಿ ಇರಲಿಲ್ಲ. ಮನೆಯ ಗೇಟಿನ ಬಳಿ ಅಪ್ಪ ಅವ್ವ ಪಕ್ಷಿಗಳು ಚುಚ್.... ಚುಚ್.... ಎಂದು ಪುರುಸೊತ್ತು ಇಲ್ಲದೆ ಕೂಗುತ್ತಿರುವುದು ಕೇಳಿಸಿತು. ಅಲ್ಲಿಗೆ ಹೋಗಿ ನೋಡಿದಾಗ ಮರಿ ಕಾಂಪೌಂಡ್ ಗೋಡೆಗೆ ಒರಗಿ ಕುಳಿತಿತ್ತು. ಮರಿಯ ಅಪ್ಪ ಅವ್ವ ಗೇಟಿನ ಮೇಲೆ ಅತ್ತಿಂದ ಇತ್ತ, ಇತ್ತಿಂದ ಅತ್ತ ಹಾರಾಡ್ತಾ ಕೂಗ್ತಿರೋದು ಕೇಳಿ ಆ ಕಡೆ ನೋಡಿದೆ. ಗೇಟಿನ ಕೆಳಗೆ ಎರಡು ಮುಂಗುಸಿಗಳಿದ್ದವು. ಅವುಗಳು ನಮ್ಮ ಮರಿಯನ್ನು ತಿಂದು ಹಾಕಬಹುದು ಎಂಬ ಬೆದರಿಕೆಯಿಂದ ಆ ಪೋಷಕರು ಗೇಟಿನ ಒಳಗಡೆ ಬರದಂತೆ ತಡೆದು ಓಡಿಸುತ್ತಿದ್ದವು. ಇದನ್ನು ಕಂಡ ನನಗೆ, ಯಾವುದೇ ಜೀವಿಯಾದರೂ ಅವ್ವ ಅಪ್ಪಂದಿರು ತಮ್ಮ ಮಕ್ಕಳ ಸುಖಕ್ಕಾಗಿ ಪ್ರಾಣ ಲೆಕ್ಕಿಸದೇ ಅಪಾಯಗಳನ್ನು ಎದುರಿಸುತ್ತವೆಯಲ್ಲಾ ಎಂದು ಅಚ್ಚರಿಯಾಯಿತು. ಇದಾದ ಕೆಲವು ಸಮಯದಲ್ಲಿ ಗೇಟಿನ ಮೇಲೆ ಕುಳಿತಿದ್ದ ಒಂದು ಪಕ್ಷಿಯು ಎತ್ತಲೋ ಹಾರಿ ಹೋಯಿತು. ಸ್ವಲ್ಪ ಸಮಯದಲ್ಲೇ ಹಿಂದಿರುಗಿದ ಅದು ಮರಿಯ ಬಳಿಗೆ ಹೋಗಿ ತನ್ನ ಕೊಕ್ಕಿನಲ್ಲಿದ್ದ ಸಣ್ಣ

ಕೀಟವನ್ನು ಅದಕ್ಕೆ ಗುಟುಕು ನೀಡಿತು. ಇಷ್ಟು ಆನಂದವಾಗಿರುವ ಕುಟುಂಬದ ನಡುವೆ ನನ್ನ ಇರುವಿಕೆಯು ತೊಂದರೆಯಾಗಬಾರದೆಂದು ನಾನು ಮನೆಯ ಒಳಕ್ಕೆ ಹಿಂದಿರುಗಿದೆ. ಸ್ವಲ್ಪ ಸಮಯದ ನಂತರ ಮರಿಯೊಂದೆ ಕೂಗುತ್ತಿರುವುದು ಕೇಳಿಸಿತು. ಹೋಗಿ ನೋಡಿದಾಗ ಅಪ್ಪ ಅವ್ವ ಇರಲಿಲ್ಲ. ಬೊಗಸೆಯಲ್ಲಿ ಹಿಡಿದುಕೊಳ್ಳುವಾಗ ಬೆದರಿ ಹಾರಲು ರೆಕ್ಕೆ ಬಡಿಯುತ್ತಿತ್ತು. ನಿಧಾನವಾಗಿ ಕೈಯಲ್ಲಿ ಹಿಡಿದು ಬಕೇಟಿನಲ್ಲಿದ್ದ ನೀರಿಗೆ ಮರಿಯ ಕೊಕ್ಕನ್ನು ತಾಗಿಸಿದಾಗ ಅದು ನೀರು ಕುಡಿಯುತ್ತಿರುವುದನ್ನು ನೋಡಿ, ಮರಿಗೆ ಎಷ್ಟು ನೀರಡಿಕೆಯಾಗಿತ್ತು, ಎನ್ನುವುದು ಗೊತ್ತಾಯಿತು. ಅಂಗೈಯಲ್ಲಿ ಹಿಡಿದು ಬೆರಳಿಂದ ತಲೆಯನ್ನು ಸವರಿದಾಗ ತಲೆ ಹಿಂದಕ್ಕೆ ತೆಗೆದುಕೊಂಡಿತು. ಅಷ್ಟೊತ್ತಿಗಾಗಲೇ ಮರಿಯ ಅಪ್ಪ ಅವ್ವ ಬಂದದ್ದು ನೋಡಿ, ಮರಿಯನ್ನು ಕೆಳಗೆ ಇಳಿಸಿ ದೂರ ಸರಿದೆ.

ಮರಿ ಪಿಕಳಾರ ಪಕ್ಷಿ ಹಾರಿ ಮುಂದೆ ಹೋದ ಹಾಗೆಲ್ಲ ಹಿಂದಿಂದೆ ಕಾವಲುಗಾರರಾಗಿ ಅಪ್ಪ ಅವ್ವ ಪಕ್ಷಿಗಳು ಹೋಗುತ್ತಿದ್ದವು. ಈ ಪಿಕಳಾರ ಪಕ್ಷಿಗಳ ಬದುಕಿನ ಹೋರಾಟ ನಮಗೂ ಕನ್ನಡಿಯಲ್ಲವೇ ಅನಿಸಿತು.







**ಲೇಖನ:** ಶರಣಪ್ಪ ಎಚ್. ಸಂಗನಾಳ

ಗದಗ ಜಿಲ್ಲೆ




# ಚಿಟ್ಟೆಯ ಮೊಟ್ಟೆ

ಮಳೆಗಾಲ ಆಗಷ್ಟೇ ಆರಂಭವಾಗಿತ್ತು. ಪರಿಸರ ಸಂಪೂರ್ಣವಾಗಿ ತನ್ನ ಜಗತ್ತಿನಲ್ಲಿ ಮುಳುಗಿ ಹೋಗಿತ್ತು! ಸತತವಾಗಿ ಎರಡು ದಿನ ಸುರಿದ ಮಳೆ ಸ್ವಲ್ಪ ಬಿಡುವು ಕೊಟ್ಟಿದ್ದೇ ತಡ, ನನ್ನ ಮಗ ತನ್ನ ಪುಟ್ಟ ಸೈಕಲ್ಲನ್ನು ಮನೆಯಂಗಳಕ್ಕೆ ಲಗುಬಗೆಯಿಂದ ಇಳಿಸತೊಡಗಿದ್ದ. ಇನ್ನೇನು ಸೈಕಲ್ ತುಳಿಯಬೇಕು, ಅಷ್ಟರಲ್ಲಿ ಚಿಟ್ಟೆಯೊಂದು ಅವನ ಸುತ್ತ ಹಾರಾಡತೊಡಗಿತ್ತು. ಅವನ ದೃಷ್ಟಿಯೆಲ್ಲಾ ಅದರತ್ತ ನೆಟ್ಟಿತ್ತು. ಅದು Common Mormon ಹೆಣ್ಣು ಚಿಟ್ಟೆಯಾಗಿತ್ತು. ಹಾರಿ ಹಾರಿ ಎಲ್ಲ ಸಸ್ಯಗಳ ಸುತ್ತ ಗಿರಕಿ ಹೊಡೆಯುತ್ತ ಕರಿಬೇವಿನ ಗಿಡದ ಸುತ್ತಲೇ ಹೆಚ್ಚು ಹಾರುತ್ತಿತ್ತು. 'ಅವ್ವಾ ನೋಡಿಲ್ಲಿ ಚಿಟ್ಟೆ ಕರಿಬೇವನ್ನು ತಿಂತಿರಬೇಕು! ಅಜ್ಜಿಗೆ ಹೇಳ್ತಿನಿ ತಾಳು, ಅವಳ ಕರಿಬೇವಿನ ಎಲೆಯನ್ನು ಚಿಟ್ಟೆ ಒಯ್ಯುತ್ತಿದೆ ಎಂದು!' ಹೇಳುತ್ತಾ ಅಜ್ಜಿಯನ್ನು ಕರೆಯಲು ಒಳಗೋಡಿದ. ಅಜ್ಜಿಯು ಅದೇ ವೇಗದಿಂದ ಧಾವಿಸಿ ಬಂದು 'ಆ ಚಿಟ್ಟೆಯನ್ನು ಕರಿಬೇವಿನ ಗಿಡದ ಹತ್ತಿರ ಬಿಡಬೇಡ. ಅದರ ಮರಿಗಳು ನನ್ನ ಗಿಡವನ್ನು ತಿಂದು ಖಾಲಿ ಮಾಡುತ್ತವೆ' ಎಂದು ಹೇಳಿದಳು. ಈಗ ನನ್ನ ಮಗನಿಗೆ ಅದರ ಮರಿಗಳ ಬಗ್ಗೆ ಕುತೂಹಲ ಮೂಡಿತು. ಗಿಡವನ್ನೆಲ್ಲ ಅಲ್ಲಾಡಿಸಿ ನೋಡಿ ಮರಿಗಳಿಗಾಗಿ ಹುಡುಕತೊಡಗಿದ. ಅಜ್ಜಿಯು 'ಅಯ್ಯೋ ಪುಟ್ಟ! ಬಹುಷಃ ಚಿಟ್ಟೆ ಈಗಷ್ಟೇ ಮೊಟ್ಟೆಗಳನ್ನಿಟ್ಟಿರಬಹುದು. ಸ್ವಲ್ಪ ದಿನಗಳ ನಂತರ ಮರಿಗಳು ಹೊರ ಬರುತ್ತವೆ. ಎಲ್ಲಿ? ಮೊಟ್ಟೆ ಹುಡುಕು ನೋಡೋಣ!' ಎಂದಿದ್ದಕ್ಕೆ ನನ್ನ ಮಗ ಅದೇನು ತಿಳಿದುಕೊಂಡನೋ 'ನನ್ನೆತ್ತರದ ಗಿಡದಲ್ಲಿ ಅದು ಹೇಗೆ ಮೊಟ್ಟೆ ಇಡುತ್ತದೆ?




(ಬಹುಷಃ ಕೋಳಿ ಮೊಟ್ಟೆಯ ಗಾತ್ರವನ್ನು ಊಹಿಸಿಕೊಂಡಿರಬೇಕು!) ಕೊನೆಗೆ ನಾನು ಇವರ

ಮಧ್ಯೆ ಪ್ರವೇಶಿಸಿ ಕರಿಬೇವಿನ ಚಿಗುರೆಲೆಯ ಹಿಂಬದಿಯಲ್ಲಿ ಚಿಟ್ಟೆಯ ಒಂದು ಗಸಗಸೆ ಗಾತ್ರದ ತಿಳಿ ಹಳದಿ ಬಣ್ಣದ ಮೊಟ್ಟೆಯನ್ನು ತೋರಿಸಿದೆ. ನನ್ನ ಮಗ ಮತ್ತೊಂದು ನೂರು ಪ್ರಶ್ನೆಗಳನ್ನು ಕೇಳಿದ. ಅವನಿಗೆ ಎಲ್ಲಿಲ್ಲದ ಕುತೂಹಲ ಮೂಡಿತ್ತು. ದಿನಕ್ಕೆರಡು ಬಾರಿಯಾದರೂ ಗಿಡದ ವಿವಿಧ ಎಲೆಗಳ ಮೇಲೆ ಇದ್ದ ಮೊಟ್ಟೆಗಳನ್ನು ಪರೀಕ್ಷಿಸುತ್ತಿದ್ದ. ಐದಾರು ದಿನಗಳಾದ ಮೇಲೆ ಚಿಕ್ಕ ಲಾರ್ವಾಗಳು ಕಾಣಿಸತೊಡಗಿದವು. ಮೊಟ್ಟೆಯಿಂದ ಚಿಟ್ಟೆಯೇ ಹೊರಬರುವುದೆಂದು ಎಣಿಸಿದ್ದ ಪ್ರಣವನಿಗೆ ತುಸು ನಿರಾಸೆಯಾಯಿತು. ಅವನಿಗೆ ಚಿಟ್ಟೆಯ ಜೀವನ ಚಕ್ರವನ್ನು ಅರ್ಥ ಮಾಡಿಸುವ ಸಲುವಾಗಿ ಒಂದು ಕಾರ್ಡ್ ಬೋರ್ಡಿನ ಮೇಲೆ ಚಿಟ್ಟೆಯ ಚಿತ್ರ ತೆಗೆದು ಅವನಿಗೆ ಬಣ್ಣ ಹಚ್ಚಲು ಹೇಳಿ, ಎಲೆ, ಮೊಟ್ಟೆಯನ್ನು ಸೂಚಿಸಲು ಗಸಗಸೆ, ಅದರ ಪ್ಯೂಪಾ ಎಲ್ಲವನ್ನೂ ಸಿದ್ದ ಪಡಿಸಿ ವಿವರಿಸಿದರೆ, ಪ್ರಣವ 'ಅಯ್ಯೋ! ಇಲ್ಲೇ ನಮ್ಮ ಕರಿಬೇವಿನ ಗಿಡದಲ್ಲಿ ಲಾರ್ವಗಳಿವೆಯಲ್ಲ! ಅದನ್ನೇ ನೋಡ್ತೀನಿ ಬಿಡು. ಚಿಟ್ಟೆ ಹೊರ ಬರುವ ತನಕ ನಾನು ಅಲ್ಲಾಡುವುದೇ ಇಲ್ಲ' ಎಂದು ಬಿಟ್ಟ. 'ಎಲಾ ಇವನ? ' ಎಂದು ಹಲ್ಲು ಕಚ್ಚಿ (ನನ್ನ 50 ನಿಮಿಷಗಳ ಪರಿಶ್ರಮವನ್ನು ಕಡೆಗಣಿಸಿದ್ದಕ್ಕಾಗಿ!) ನನ್ನ ಚಟುವಟಿಕೆಯನ್ನು ಎತ್ತಿಟ್ಟು ಅವನ ಹಿಂದೆ ಓಡಿದೆ.






ಒಂದು ದಿನದ ಬಕಾಸುರ ಲಾರ್ವಗಳು ಆಗಲೇ ಅರ್ಧ ಎಲೆಯನ್ನು ತಿಂದಿದ್ದವು. ಒಂದು ವಾರದಲ್ಲಿ ಐದಾರು ಲಾರ್ವಗಳು ಸೇರಿ ಗಿಡದ ಅರ್ಧದಷ್ಟು ಎಲೆಗಳನ್ನು ಕಬಳಿಸಿ ಬಿಟ್ಟಿದ್ದವು! ಇಷ್ಟು ದಿನಗಳ ತನಕ ಹಕ್ಕಿಯ ಮಲದಂತೆ ಕಾಣುತ್ತಿದ್ದ ಲಾರ್ವಗಳು (1st instar to 4th instar) ಈಗ ಹಸಿರು ಬಣ್ಣದ ಲಾರ್ವಾಗಳಾಗಿ (5th instar caterpillar) ಮಾರ್ಪಾಡು ಹೊಂದಿ ಸಾಕಷ್ಟು ಬೆಳೆದಿದ್ದವು. ಪ್ರಣವನಿಗೆ ಬಂದ ಸಹಸ್ರ ಪ್ರಶ್ನೆಗಳಲ್ಲಿ ಇಷ್ಟು ಅಸಹ್ಯವಾದ ಕಂಬಳಿ ಹುಳುಗಳು ಅವು ಹೇಗೆ ಸುಂದರ ಚಿಟ್ಟೆಗಳಾಗುತ್ತವೆ? ಎಂದು! ಕಂಬಳಿಹುಳುಗಳು ತುಂಬಾ ಬುದ್ಧಿವಂತ ಕೀಟಗಳು. ಹಕ್ಕಿಯ ಮಲದಂತೆ ಕಾಣಿಸಿಕೊಂಡರೆ ಯಾವ ಬೇಟೆಗಾರ ಪಕ್ಷಿಗಳು ತಮ್ಮನ್ನು ತಿನ್ನುವುದಿಲ್ಲ ಎಂದು ಆ ಮಾರ್ಪಾಡು! ಉದ್ಯಾನವನದಲ್ಲಿ ಸಾಕಷ್ಟು ಪಕ್ಷಿಗಳಿದ್ದು ಅವುಗಳ ಮರಿಗಳ ಕೊನೆಗಾಣದ ಹಸಿವು ಇದ್ದರೂ ಕೂಡ ಈ ಕಂಬಳಿ ಹುಳುಗಳು ಚಿಗುರೆಲೆಯ ಮೇಲೆ ಕುಳಿತು ದಿನವಿಡೀ ತಿನ್ನುತ್ತಾ ಇದ್ದರೂ ಬದುಕಿ ಉಳಿದಿದ್ದವು. ಈಗ ಕೊಬ್ಬಿದ ಕಂಬಳಿ ಹುಳುಗಳು ತಮ್ಮ ಹಳೆಯ ಹಕ್ಕಿ ಮಲದ ರೂಪವನ್ನು ಕಳಚಿ ಬಿಟ್ಟಿದ್ದವು. ಹೀಗಾಗಿಯೇ ಕೆಲ ಬುಲ್ ಬುಲ್ ಹಾಗು ಮಡಿವಾಳ ಹಕ್ಕಿಗಳು ಬಂದು ಎಲೆಗಳ ಮೇಲಿದ್ದ ಕೆಲ ಲಾರ್ವಾಗಳನ್ನು ತಿಂದು ಬಿಟ್ಟಿದ್ದವು. ಇನ್ನುಳಿದ ಲಾರ್ವಗಳು ಪೂರ್ತಿ ಗಿಡದ ಎಲೆಗಳನ್ನು ತಿಂದು ಮುಗಿಸಿದ್ದರಿಂದ ಬೇರೆ ಗಿಡಗಳಿಗಾಗಿ ಅರಸಿ ಹೋದವು. ಬೆಳಗಾದೊಡನೆ ನನ್ನ ಮಗ ಚಿಟ್ಟೆಯ ಕಂಬಳಿ ಹುಳುಗಳಿಗಾಗಿ ಹಪಹಪಿಸತೊಡಗಿದರೆ ಅಜ್ಜಿಯು ತನ್ನ ಖಾಲಿಯಾದ ಕರಿಬೇವಿನ ಎಲೆಗಳಿಗಾಗಿ ಹಲುಬತೊಡಗಿದಳು. ಇವರ ಮಧ್ಯೆ ಮತ್ತೆ ಸುರಿಯತೊಡಗಿದ ಮಳೆ. ತುಂಬಾ ಪ್ರಯತ್ನ ಪಟ್ಟು ಹುಡುಕಿದ ಮೇಲೆ ಎರಡು ಕ್ರಿಸಲಿಸ್ (Crysalis) ಸಿಕ್ಕವು. ಅವು ಅಲ್ಲಿ ಎಷ್ಟು ದಿನಗಳಿಂದ ಇವೆ ಎಂದು ಗೊತ್ತಿಲ್ಲದ ಕಾರಣ ಚಿಟ್ಟೆ ಯಾವಾಗ ಹೊರ ಬರುತ್ತದೆ ಎಂದು ಹೇಳಲಸಾಧ್ಯವಾಗಿತ್ತು. ದಿನವೂ ಪರೀಕ್ಷಿಸುವುದೊಂದೇ ನಮ್ಮ ಆಯ್ಕೆಯಾಗಿತ್ತು. ಮರುದಿನವೇ ಕ್ರಿಸಲಿಸ್ ಒಂದು ಕಡೆಯಿಂದ ತೆರೆದುಕೊಂಡಿತ್ತು. ಆದರೆ ಚಿಟ್ಟೆಯ ಸುಳಿವೇ ಇಲ್ಲ. ಪ್ರಣವ ಅಳತೊಡಗಿದ್ದ. ಜಿಟಿ ಜಿಟಿ ಮಳೆ ಶುರುವಾಗಿತ್ತು. ಕ್ರಿಸಲಿಸ್ ನಿಂದ ಹೊರಬಂದ ಚಿಟ್ಟೆಗೆ ಕೂಡಲೇ ಹಾರುವಷ್ಟು ಸಾಮರ್ಥ್ಯವಿಲ್ಲದ್ದರಿಂದ ಇಲ್ಲೇ ಎಲ್ಲೋ ಇರಬಹುದೆಂದು ನಾನು ಹುಡುಕುತ್ತಿದ್ದೆ. ಅಷ್ಟರಲ್ಲೇ ಆ ಅವಿತಿದ್ದ ಹೊಸ ಚಿಟ್ಟೆಯ ರೆಕ್ಕೆಯ ಕಪ್ಪು ಬಣ್ಣದ ತುದಿ ಪಕ್ಕದ ಮೇ ಫ್ಲವರ್ ಗಿಡದ ಎಲೆಯ ಹಿಂಬದಿಯಲ್ಲಿ ಸ್ವಲ್ಪವೇ ಕಾಣಿಸಿತು. 'ಆಹ್!

ಸಿಕ್ಕಿಬಿಟ್ಟಿತು!' ಎಂದು ಪ್ರಣವನಿಗೆ ತೋರಿಸಿದೆ. ಪ್ರಣವನ ಸಂತೋಷಕ್ಕೆ ಪಾರವೇ ಇರಲಿಲ್ಲ. ಚಿಟ್ಟೆಯ ರೆಕ್ಕೆಗಳು ಸ್ತಬ್ಧವಾಗಿದ್ದು ಬರಲಿರುವ ತನ್ನ ಮುಂದಿನ ಜೀವನಕ್ಕೆ ಅಣಿಗೊಳ್ಳುತ್ತಿದ್ದವು. ಚಿಟ್ಟೆಯ ಸುಂದರವಾದ ಹೊಳೆಯುವ ಬಣ್ಣ ಪ್ರಣವನ ಹೊಳೆಯುವ ಕಣ್ಣುಗಳಲ್ಲಿ ಇನ್ನಷ್ಟು ಸುಂದರವಾಗಿ ಕಂಡಿತು!




**ಲೇಖನ: ಅನುಪಮಾ ಕೆ. ಬೆಣಚಿನಮರ್ಡಿ**

**ಬೆಂಗಳೂರು ಜಿಲ್ಲೆ**




# ಅರೆಮಾರಿಯ ಅನುಭವಗಳು –02

ನಿತ್ಯವೂ ಹಸಿ ಹಸಿರನ್ನು ತನ್ನ ಮೈಯಿಂದ ಬಸಿದು ಕೊಡುವ ಪಶ್ಚಿಮ ಘಟ್ಟದ ತೇವಾಂಶ ಭರಿತ ಕಾಡುಗಳ ನಡುವೆ ಬೆಳೆದ ಹಿಮ - ಕಿತ್ತಳೆ ಕಡುಗೆಂಪು ಬಣ್ಣದ ಹೂವುಗಳಿಂದಾವೃತವಾದ ಅಶೋಕ ಮರದ ಬೇರುಗಳ ಮೈ ತೊಳೆದು ಬರುವ ಸಣ್ಣ ತೊರೆಯ ನೀರು ಈ ಅಂಗಾಲಿನೆದೆ ತಾಕುತ್ತಿದ್ದಂತೆಯೆ ಮೈ ಒಳಗೆ ಅಸಂಖ್ಯಾತ ಎಲೆಗಳು ತಿಳಿಗಾಳಿ ಸುಳಿಗೆ ಒಟ್ಟಿಗೆ ಕಂಪಿಸಿದಂತಹ ರೋಮಾಂಚನ ಒಂದು ಸಂಚಾರವಾಗುತ್ತದೆ! ಸರಿ ಸುಮಾರು ಮೂವತ್ತು ಮೂವತ್ತೈದು ಮೀಟರ್ ಎತ್ತರಕ್ಕೆ ಬೆಳೆವ ಬಿಳಿದೇವದಾರಿ ಮರಗಳು ಎರಡೂ ಕೈ ಚಾಚಿ ಬಾಚಿ ತಬ್ಬಿದರೂ ಆ ಒಂದುವರೆ ಮೀಟರ್ ನಷ್ಟು ಸುತ್ತಳತೆ ಹೊಂದಿದ ತಿರುಳು ಹಳದಿ ಮಿಶ್ರಿತ ಕಂದು ಬಣ್ಣದ ಕಾಂಡಗಳು ಕಾನ್ ಅರಣ್ಯ ವಲಯಗಳನ್ನು ಸಂಪೂರ್ಣವಾಗಿ ಆಳುತ್ತಿದೆ. ಈ ನಿತ್ಯ ಹಸಿರು ಕಾಡುಗಳನ್ನು ದಾಟಿ ಸುಮಾರು 250 ಸೆಂ.ಮೀ. ಗಳಿಗೂ ಅಧಿಕ ಮಳೆ ಸುರಿಸುವ ನಿತ್ಯ ಹರಿದ್ವರ್ಣದ ಹಸಿ ಹಸಿರು ಕಾಡುಗಳ ಒಳಹೊಕ್ಕಷ್ಟು ಸೂರ್ಯನ ಕಿರಣಗಳು ಸಹ ನೆಲಕ್ಕೆ ತಾಕದಷ್ಟು ದುರ್ಗಮವಾಗಿ ಜಟಿಲಗೊಳ್ಳುತ್ತವೆ! ಹೆಬ್ಬಲಸು, ದೂಪ, ನಂದಿ, ಹೊನ್ನೆ, ತೇಗದ ಮರಗಳು ಎದುರುಗೊಳ್ಳುವಾಗ ಏಲಕ್ಕಿ, ಲವಂಗದಂತಹ ಔಷಧಿ ಸಸ್ಯಗಳ ಸಂಪತ್ತು ಸಹ ಜೊತೆಗೂಡುತ್ತವೆ. ಹೆಚ್ಚು ಮಳೆ ಬೀಳುವ ಕಾಡಾಗಿರುವುದರಿಂದ ನಿತ್ಯವೂ ಹಸಿರುತನ ಕಾಡಿನುಸಿರನಲಿ ಮೇಳೈಸುತ್ತಿರುತ್ತದೆ.




ಹಸಿ ಕಾಡುಗಳ ಹಾದಿಯೂ ಸಹ ಭಯಂಕರ ದುಸ್ಥಿತಿಯಲ್ಲಿರುವ ಅಂದಾಜು ಬಿಡಿ, ಅಸಲಿಗೆ ಹಾದಿಯೂ ಇರುವುದಿಲ್ಲ! ನಾವು ಕಿತ್ತಿಡುವ ಹೆಜ್ಜೆಗಳ ಗುರುತು ಸಹ ಮೂಡದಷ್ಟು ಕಾಡು ತನ್ನ ಒಣಗಿದೆಲೆಗಳನ್ನು ಉದುರಿಸಿಕೊಂಡು ತನ್ನ ಒಳಗುಟ್ಟನ್ನು ಆಂತರಿಕವಾಗಿ ಕಾಪಾಡಿಕೊಳ್ಳುತ್ತದೆ! ಇಂಥವೇ ತರಗೆಲೆಗಳ ಒಟ್ಟು ಮಿಶ್ರಣದ ಗುಡ್ಡೆ ಹಾಕಿಕೊಂಡು ತನ್ನ ಮೈ ತಾನೆ ಸುತ್ತಿಕೊಳ್ಳುತ್ತಾ ನಲವತ್ತು ದಿನಕ್ಕೂ ಹೆಚ್ಚು ಊಟವಿಲ್ಲದೆ ಹೆಬ್ಬಾವುಗಳು ತನ್ನ ಮೊಟ್ಟೆಗಳಿಗೆ ಕಾವು ಕೊಟ್ಟು ಮರಿ ಮಾಡುತ್ತದೆ. ಹಾವುಗಳನ್ನು ಹಾವುಗಳೇ ನುಂಗುವ ಮತ್ತು ಹಾವಿನ ಮೊಟ್ಟೆಗಳನ್ನು ಹಸಿದ ಹಾವುಗಳೇ ಕಬಳಿಸುವ ಅಪರೂಪದ ಪ್ರಕೃತಿಯ ಹಸಿವಿನ ದೃಶ್ಯಗಳಿರುವ ಇಂಥಹ ಕಾಡುಗಳು ನಮ್ಮಲ್ಲಿ ಅಚ್ಚರಿಯ ಭಾವ ಮೂಡಿಸುತ್ತವೆ! ಹೆಜ್ಜೆ ಕಿತ್ತಿಟ್ಟಷ್ಟೂ ತರೆಗೆಲೆಗಳ ಮೈ ಮುರಿದ ಸದ್ದು ಗಾಳಿ ತರಂಗಗಳ ಒಳಹೊಕ್ಕು ಈ ಕಿವಿಗೆ ತಾಕಿ ಅನಂತ ಮೌನದ ಗುಟ್ಟೊಂದನ್ನು ಸೀಳುತ್ತದೆ!

ಎಂಟುನೂರು ಮೀಟರ್ ಎತ್ತರದ ಈ ಪಶ್ಚಿಮ ಘಟ್ಟದ ಕಾಡುಗಳು ತನ್ನ ಒಡಲೊಳಗೆ ಬೆಳೆಸಿಕೊಂಡ ಧುಮಾ ಮರಗಳು, ತನ್ನ ತಪ್ಪಲಿಗೆ ತಗಲುವ ಜಡಿಮಳೆಯ ಹನಿಯನ್ನೆಲ್ಲಾ ಬಸಿದು ತಾ ತೊಟ್ಟಿಕ್ಕುವಾಗ ತನ್ನದೇ ಕಾಂಡದವರೆಗೆ ನಿಸರ್ಗ ಸ್ನಾನ ಒಂದನ್ನು ನಿತ್ಯವೂ ಮಾಡುತ್ತಾ ತನ್ನ ಬೇರಿನ ಮೇಲ್ಭಾಗದ ಕಾಂಡದಿಂದ ಮೇಲಕ್ಕೆ ಪಾಚಿಗಟ್ಟಿಸಿಕೊಂಡಿರುತ್ತದೆ. ಇಂಥಹ ಅರೆ ಹಸಿ ಹಸಿರನ್ನು ಮುಟ್ಟಿ ಸುಖಿಸುವುದೇ ಒಂದು ತರ ಮಜವಾಗಿರುತ್ತದೆ. ಮೃದುವಲ್ಲದ ಅರೆಮೃದು (ಒರಟು ಮೈ) ಹಾಗೂ ತೊಗಟೆ ಸವರಿದನುಭವವಾಗುತ್ತದೆ! ಮುರಿದು ಬಿದ್ದ ಗಿಡಗಳ ಕಾಂಡದ ಮೈ ತೊಳೆದು ಹರಿವ ತೊರೆಯ ನೀರಿನ ಜುಳು ಜುಳು ಸದ್ದು ಒಂದರೆಕ್ಷಣ ನಮ್ಮನ್ನು ನಿಲ್ಲಿಸಿ ಮಾತಾಡಿಸಿದಂತೆ ಭಾಸವಾಗುತ್ತದೆ. ಅದಮ್ಯ ಸಮಾಧಾನದಿಂದ ಅರಳುವ ಶಿಲೀಂಧ್ರಗಳು ತಮ್ಮ ಸಣ್ಣ ಗಾತ್ರ ವಿನ್ಯಾಸಗಳ ಕಾರಣದಿಂದ ನಿರ್ಜೀವ ವಸ್ತುಗಳ ಮೇಲೆ ಮತ್ತು ಸಸ್ಯಗಳ ಮೇಲೆ ಬೇರೆ ಬೇರೆ ಬಣ್ಣಗಳಲ್ಲಿ ಬೆಳೆದು ತಮ್ಮ ರಹಸ್ಯವಾದ ಜೀವನ ಶೈಲಿಗಳ ಕೌತುಕದ ಗುಟ್ಟೊಂದನ್ನು ಬಿಟ್ಟುಕೊಡುತ್ತವೆ. ಇಷ್ಟು ಅಖಂಡ ಅರಣ್ಯ ಸಂಪತ್ತಿನಡಿಯಲ್ಲಿ ಜೌಗು ಕಾಣುವುದೇ ವಿರಳ!






ನಡೆದಷ್ಟು ಹುರುಪು ಹೆಚ್ಚುಗೊಳ್ಳುವ ಮತ್ತು ನಡೆಯಲೇಬೇಕಾದ ತುರ್ತು ಸಂದರ್ಭ ಒಂದನ್ನು ಸೃಷ್ಟಿಸಿಕೊಡುವ ದುರ್ಗಮ ಮತ್ತು ಭಯಂಕರ ಸೌಂದರ್ಯ ಹೊತ್ತ ಈ ಪಶ್ಚಿಮ ಘಟ್ಟದ ತಪ್ಪಲು ಸಾಲುಗಳು ಅರಳಿಸುವ ಹೂವುಗಳು ಹುಬ್ಬೇರಿಸಿ ನೋಡುವಂತೆ ತೆರೆದುಕೊಳ್ಳುತ್ತವೆ. ಸಾವಿರ ಸಾವಿರ ಪ್ರಭೇದಗಳನ್ನು ತನ್ನ ಒಡಲೊಳಗಿರಿಸಿಕೊಂಡು ಪೋಷಿಸುತ್ತಿದೆ. ಲಕ್ಷಾಂತರ ಜೀವ ಸಂಪತ್ತಿಗೆ ಉಸಿರು ಎರೆದು ಕೊಟ್ಟಿದೆ. ಕೋಟ್ಯಾಂತರ ಎಲೆಗಳು ನಿತ್ಯವೂ ಟಿಸಿಲೊಡೆಯಲು ಪ್ರೇರೇಪಿಸುತ್ತದೆ! ಇವೆಲ್ಲಾ ಅತಿ ಸೂಕ್ಷ್ಮ ಸಮಾಧಾನದಿಂದ ನಡೆಯುವ ಜೈವಿಕ ಕ್ರಿಯೆಗಳು. ಇಂತದೇ ಸೂಕ್ಷ್ಮತೆ, ಇಂತದೇ ತಾಳ್ಮೆ - ಸಮಾಧಾನ ಬದುಕಿನಲ್ಲಿ ರೂಢಿಸಿಕೊಳ್ಳಬೇಕು. ಪ್ರಕೃತಿ ನರಳಿ ಅರಳುವುದು ಎಷ್ಟು ಚೆಂದವಾಗಿ ನಮಗೆ ಕಾಣುತ್ತದೆಯೊ ವಾಸ್ತವದಲ್ಲಿ ಬದುಕು ಸಹ ಅಷ್ಟೇ ಸಾಮ್ಯತೆಗೊಳಪಟ್ಟಿದ್ದು, ಅದನ್ನು ನಾವು ಆಂತರಿಕವಾಗಿ ಅವಲೋಕಿಸಬೇಕಿದೆ. ಅಲೆದಷ್ಟು ಹೊಸ ವಿಚಾರಗಳು ಹೊಳೆಯುತ್ತವೆ. ನೇಸರನ ಬಿಸಿಲುಕೋಲಿನ ಬಿಸಿ ತಾಕದ ಶೀತಲ ಒಳಗುಟ್ಟು ತೆರೆದುಕೊಳ್ಳುತ್ತದೆ. ವಿಸ್ತಾರಗೊಳ್ಳುವುದೆಂದರೆ ಅರಿಯುತ್ತ ಸಾಗುವುದೇ ಆಗಿದೆ. ಅರಿತಷ್ಟು ಲೌಕಿಕತೆ ತಾನೆ ಕಳಚಿಕೊಳ್ಳುತ್ತದೆ. ಪ್ರಕೃತಿಯ ಮೂಲ ಸೆಳೆತ ಒಳಗೊಳಗೆ ಜಾಗೃತಗೊಳ್ಳುತ್ತದೆ. ಅನಂತ ಸುಖದ ಜಗತ್ತು ಬರಮಾಡಿಕೊಳ್ಳುವಾಗ ನಿರಂತರ ಅಲೆದಾಟದ ದಣಿವಿಗೆ ಹೊಸ ಉತ್ಸಾಹ ಸಂಕಲನಗೊಳ್ಳುತ್ತದೆ. ಮತ್ತಷ್ಟು ತೆರೆದುಕೊಳ್ಳಬೇಕೆನಿಸುವುದೇ ಇಂತಹ ಸುಖ ಸುರಿದು ಬರುವಾಗ!




**ಲೇಖನ:** ಮೌನೇಶ ಕನಸುಗಾರ

ಕಲ್ಬುರ್ಗಿ ಜಿಲ್ಲೆ



ವಿವಿ ಅಂಕಣ

# ಆನೆ ಸೊಂಡಿಲ ಬಲ!

ಇಷ್ಟು ಹೊತ್ತು ನೀರವ ಮೌನದ ಮೃದು ಅಲೆಗಳಲ್ಲಿ ಈಜಿ ತೇಲುತ್ತಿದ್ದ ನನ್ನ ನಿದ್ರಾ ಲೋಕಕ್ಕೆ ಆ ಶಬ್ದ ನುಸುಳಿ ಬಂದು ಒಂದು ಸಣ್ಣ ಸುನಾಮಿಯನ್ನೇ ಎಬ್ಬಿಸಿತ್ತು. ಕಣ್ಣು ಬಿಟ್ಟು ನೋಡುವ ಮುಂಚೆಯೇ ಕಿವಿಗಳಿಗೆ ಯಾರೋ ಕಿರುಚುವ ಶಬ್ದ ರವಾನೆಯಾಗಿಬಿಟ್ಟಿತ್ತು. ಭಯ, ಕೋಪ, ವೇದನೆಯ ಜೊತೆಗೆ ಯಾವುದೋ ತೂಕದ ವಸ್ತುವನ್ನು ನಾನೆ ಎತ್ತಿದ ಹಾಗೆ ನನ್ನ ದೇಹವನ್ನು ಮಲಗಿದ ಭಂಗಿಯಿಂದ ನಿಧಾನಕ್ಕೆ ಮೇಲೆತ್ತಿದೆ. ಕಣ್ಣು ಬಿಟ್ಟು ನೋಡಿದರೆ ಕತ್ತಲು, ನಿದ್ದೆಯ ಮಂಪರು. ಕಣ್ಣು ತನ್ನ ಸುತ್ತಲಿನ ಬೆಳಕಿಗೆ ಹೊಂದಿಕೊಳ್ಳಲು ಸ್ವಲ್ಪ ಸಮಯ ಬೇಕಾಯ್ತು. ಕಾರಿನಲ್ಲಿರುವವರ ನೋಟದ ದಿಕ್ಕು ನನ್ನ ಕಡೆಗೇ ತಿರುಗಿತ್ತು. ಸ್ವಲ್ಪ ಆಶ್ಚರ್ಯವಾಯಿತು. ಓಹ್ ಮನೆಗೆ ಹೋಗುವ ದಾರಿಯಾದ ಕಾಡಿನಲ್ಲಿ ಚಲಿಸುತ್ತಿದ್ದರಿಂದ ಯಾವುದೋ ಪ್ರಾಣಿಯನ್ನು ಕಂಡಿರಬೇಕು ಎಂದುಕೊಂಡೆ. ಆದರೆ ಅವರ ಮಾತಿನ ವೈಖರಿ ಹಾಗೂ ಭಯದಿಂದ ಕೂಡಿದ್ದ ಶಬ್ದ ತರಂಗಗಳನ್ನು ಗಮನಿಸಿ, ನಾನೂ ಆ ದಿಕ್ಕಿಗೆ ತಿರುಗಿದೆ. ಕಾರಿನ ಡಿಕ್ಕಿಯಲ್ಲಿ ಕುಳಿತಿದ್ದರಿಂದ ನನ್ನ ಮುಖವನ್ನು ಕೇವಲ 90 ಡಿಗ್ರೀ ತಿರುಗಿಸಬೇಕಿತ್ತು ಅಷ್ಟೇ. ಮಹಾ ಎಂದರೆ ಏನಿರಬಹುದು ಜಿಂಕೆಯೋ, ಸಾರಂಗವೋ ಇಲ್ಲಾ ಕಾಟಿಯೇ ಇರಬಹುದು ಎಂದು ತಿಳಿದು ಕುತೂಹಲದಿಂದ ತಿರುಗಿದೆ. ಬಾಳೆ ಎಲೆಯಂಥಾ ಎರೆಡು ಆಕೃತಿಗಳು ಅಲುಗಾಡುತ್ತಿದ್ದವು. ಏನೆಂದುಕೊಂಡಿರಿ… ಆನೆಯ ಕಿವಿಗಳು ಕಣ್ರೀ… ಕೆಲವೇ ಗಜಗಳ ಅಂತರದಲ್ಲಿ ಗಜರಾಜ. ನನ್ನೆಲ್ಲಾ ಮಂಪರು ಕ್ಷಣಾರ್ಧದಲ್ಲಿ ಮಾಯವಾಗಿ ನಿದ್ರೆಯೇ ನಿದ್ರಾಲೋಕಕ್ಕೆ ಹಿಂತಿರುಗಿತ್ತು. ಏಕೆಂದರೆ ಹುಟ್ಟಿದಾಗಿನಿಂದ (ಸುಮಾರು 15 ವರ್ಷಗಳು) ಅದೇ ದಾರಿಯಲ್ಲಿ ಓಡಾಡುತ್ತಿದ್ದರೂ ಆನೆಯನ್ನು ಅಷ್ಟು ಹತ್ತಿರದಿಂದ ನೋಡಿದ್ದು ಅದೇ

ಮೊದಲು. ಟಾ ಟಾ ಸುಮೋವಿನ ಕೆಂಪು ಬ್ರೇಕ್ ಬೆಳಕಿನಲ್ಲಿ ಅದು, ಕೋಪಗೊಂಡ ಮದವೇರಿದ ಆನೆಯಂತೆ ಕಂಡರೂ ಅದು ನಿಂತ ಜಾಗದಿಂದ ಕದಲಲಿಲ್ಲ. ಆದ್ದರಿಂದ ಇದೂ ನಮ್ಮ ಹಾಗೆ ಸಾಧು, ಸ್ನೇಹ ಜೀವಿ ಎಂದುಕೊಂಡಿದ್ದೆವು. ಜೊತೆಗೆ ನಮ್ಮ ಕಾರು ಇನ್ನೂ ಚಾಲನೆಯಲ್ಲಿದ್ದು, ಒಂದು ವೇಳೆ ಆನೆ ಬಂದರೂ ಸಹ ಚಾಲಕರ ಸೀಟ್ ನಲ್ಲಿದ್ದ ನಮ್ಮ ಬಾಸ್ ಮುಂದೆ ಹೋಗಿ ನಮ್ಮನ್ನು ಕಾಪಾಡಿಕೊಳ್ಳುವ ಭಂಗಿಯಲ್ಲೇ ಇದ್ದರು. ಆದ್ದರಿಂದ ಆನೆ ದಾಳಿ ಮಾಡಿದರೂ ಸಹ ತಪ್ಪಿಸಿಕೊಳ್ಳಬಹುದು ಎಂಬ ಸಣ್ಣ ಧೈರ್ಯವೂ ಎಲ್ಲೋ ಮೂಲೆಯಲ್ಲಿತ್ತು. ಆದರೆ ಅಂದುಕೊಂಡದ್ದು ಒಂದು, ಆದದ್ದು ಇನ್ನೊಂದು. ಇದ್ದಕ್ಕಿದ್ದಂತೆ ಗೀಳಿಟ್ಟು ಒಂದು ಹೆಜ್ಜೆ ಮುಂದೆ ಇಟ್ಟಿತು. ನಮ್ಮ ದುರಾದೃಷ್ಟವಶಾತ್, ಮುಂದೆ ಮೂವ್ ಮಾಡಲು ಹೊರಟಾಗ ಕಾರು ಕೂಡ ಆಫ್ ಆಯ್ತು. ಆ ದೇವರಿಗೆ ಅಲ್ಲೆಲ್ಲೋ ಮೂಲೆಯಲ್ಲಿದ್ದ ಆ ಧೈರ್ಯದ ತುಣುಕೂ ಕಂಡುಬಿಟ್ಟಿತೆನಿಸುತ್ತದೆ, ಮುಗಿಯಿತು ಅಲ್ಲಿಗೆ ನಮ್ಮ ಸಾಧು-ಸ್ನೇಹತಾ ಭಾವ, ಬದುಕಿದರೆ ಸಾಕು ಬಡಜೀವ ಎನ್ನುವಷ್ಟು ಭಯವಾಗಿತ್ತು. ಗುದ್ದಿದರೆ ನಾನು ಮತ್ತು ನನ್ನ ಸ್ನೇಹಿತನೇ ಮೊದಲ ಜೋಡಿ ಕಾಯಿಗಳು ಅದಕ್ಕೆ ಹೊಡೆಯಲು ಸಿಗುತ್ತಿದ್ದುದು. ಸರಿ ಬಿಡು ನಮ್ಮ ಹಣೆಬರಹ ಎಂದುಕೊಂಡು ಕೂತಾಯಿತು. ಆದರೆ ನಮ್ಮ ಪುಣ್ಯಕ್ಕೆ ಆನೆ ಇನ್ನೊಂದು ಹೆಜ್ಜೆಯನ್ನು ಮುಂದೆ ಇಡಲಿಲ್ಲ. ನಮ್ಮನ್ನು ದುರುಗುಟ್ಟುತ್ತಾ ನೋಡುತ್ತಿತ್ತು. ಆ ಕೆಲವು ಕ್ಷಣಗಳ ಅಂತರದಲ್ಲಿ ಕಾರನ್ನು ಆನ್ ಮಾಡಲಾಗಿ, ಸ್ವಲ್ಪ ಸಮಯದ ನಂತರ ನಾವೂ ಸಹ ಸುರಕ್ಷಿತವಾಗಿ ಮನೆ ಸೇರಿದೆವು. ದಾರಿಯಲ್ಲಿ ನಡೆದ ಚರ್ಚೆಯಲ್ಲಿ ತಿಳಿದು ಬಂದದ್ದು ಇದು. ಆನೆಯು ತನ್ನ ಕಾಲುಗಳ ಸಂದಿಯಲ್ಲಿದ್ದ ತನ್ನ ಮರಿಯ ರಕ್ಷಣೆಗಾಗಿ ನಮ್ಮನ್ನು ಕೇವಲ ಅಲ್ಲಿಂದ ಓಡಿಸಲು ಮಾಡಿದ ಪ್ರಾಮಾಣಿಕ ಮಾತ್ರ ಪ್ರಯತ್ನವಿದು ಎಂದು. ಹೀಗೆ ಆನೆಯನ್ನು ಎದುರಾಗಿ ನೋಡಿದ ಘಟನೆಗಳು ಕೆಲವಿದ್ದರೆ, ಆನೆಗಳು ಸುತ್ತಮುತ್ತಲಿದ್ದಾವೆ ಎಂದು ಅವುಗಳು ತಮ್ಮ ಬಲ ಪ್ರಯೋಗಿಸಿ ಮರಗಳನ್ನು ಮುರಿಯುವ ಶಬ್ದವನ್ನು ಆಲಿಸಿ ಕಂಡುಹಿಡಿದದ್ದೇ ಹೆಚ್ಚು.



'ಆನೆ ನಡೆದದ್ದೇ ದಾರಿ' ಎನ್ನುವುದುಂಟು. ಇದನ್ನು ಯಾರೋ ಸುಮ್ಮನೆ ಹೇಳಲಿಲ್ಲ. ನಿಜವಾಗಿಯೂ ಕಾಡಿನಲ್ಲಿ ಆನೆ ಏನಾದರು ಪೊದೆಗಳ ಮಧ್ಯದಲ್ಲಿ ಮರಗಳ ಸಂದಿಯಲ್ಲಿ ನಡೆದರೆ ಅಲ್ಲಿ ನಾವು ಓಡಾಡುವಷ್ಟು ದಾರಿಯೇ ಆಗುತ್ತದೆ. ಈಗಲೂ ಸಹ ಅರಣ್ಯ ಇಲಾಖೆ ಮತ್ತು ಕಾಡಿನಲ್ಲಿ ಕೆಲಸ ಮಾಡುವ ಎಷ್ಟೋ ವನ ರಕ್ಷಕರು ಅವುಗಳು ನಡೆದ ದಾರಿಯನ್ನೇ ಬಳಸುತ್ತಾರೆ. ಆ ದೈತ್ಯಕಾಯನ ಬಲ ಅಷ್ಟು. ಸಾಮಾನ್ಯವಾಗಿ ಆನೆಯ ದೇಹದಾರ್ಢ್ಯವನ್ನು ಗಮನಿಸಿದರೆ, ಇದು ಬಲಿಷ್ಠ ಪ್ರಾಣಿ ಎನ್ನುವುದು ಅರಿವಾಗುತ್ತದೆ. ಆದರೆ, ನಾವು ಊಹಿಸಲು ಆಗದಷ್ಟು ಬಲವನ್ನು ಆನೆಯ ಒಂದು ಭಾಗವಾದ ಸೊಂಡಿಲೂ ಹೊಂದಿದೆ ಎಂದರೆ ನಂಬಬೇಕು ನೀವು. ಆದರೆ ಇಲ್ಲಿ ಸೊಂಡಿಲಿನ ಬಲವನ್ನು ನಾವು ತೂಕದ ವಸ್ತುವನ್ನು ಎತ್ತುವುದರಿಂದ ಅಳೆಯುತ್ತಿಲ್ಲ. ಬದಲಿಗೆ ನೀರು-ಗಾಳಿಯನ್ನು ಒಳಗೆ ಎಳೆದುಕೊಳ್ಳುವ ವೇಗದ ಆಧಾರದ ಮೇಲೆ ಅಳೆಯುತ್ತಿದ್ದೇವೆ ಎನ್ನುತ್ತಿದ್ದಾರೆ ಈ ಸಂಶೋಧನಾ ತಂಡ.


© STUPORTS_ISTOCK_GETTY IMAGES PLUS

ಕೆಲಸ ಮುಗಿಸಿ ಬಂದು ಅಮ್ಮನಿಗೆ ಒಂದು ಲೋಟ ಕಾಫಿ ಹೇಳಿ ಕುರ್ಚಿಯಲ್ಲಿ ಕುಳಿತು, ಆ ಕಾಫಿಯನ್ನು ಸವಿಯುವಾಗ ನಾವು ಹೇಗೆ ಆ ದ್ರವವನ್ನು ನಮ್ಮ ಬಾಯಿಯ ಒಳಕ್ಕೆ ಎಳೆದುಕೊಳ್ಳುತ್ತೇವೆ? ಎಷ್ಟು ವೇಗದಲ್ಲಿ ಎಳೆದುಕೊಳ್ಳುತ್ತೇವೆ? ಎಂಬುದನ್ನು ನಾವು ಗಮನಿಸಿರುವುದಿಲ್ಲ. ಹಾಗೆಯೇ ಮೂಗಿನ ಮುಂದುವರೆದ ಭಾಗವಾಗಿರುವ ಆನೆಯ ಸೊಂಡಿಲನ್ನು ಆನೆ ಹೇಗೆ ಬಳಸುತ್ತದೆ? ಅದರೊಳಗೆ ಗಾಳಿ ಅಥವಾ ದ್ರವ ಎಷ್ಟು ವೇಗದಲ್ಲಿ ಚಲಿಸುತ್ತದೆ? ಎಂಬುದನ್ನು ತಿಳಿದರೆ ಅಚ್ಚರಿಯಾಗುವುದರಲ್ಲಿ ಸಂದೇಹವಿಲ್ಲ. ಇದನ್ನು ತಿಳಿದುಕೊಳ್ಳಲು ಆಂಡ್ರೂ ಮತ್ತು ತಂಡ ಆನೆಯ ಮುಂದೆ ದೊಡ್ಡ ನೀರಿನ ಪಾತ್ರೆಯನ್ನು ಇಟ್ಟು, ಆನೆ ನೀರು ಕುಡಿಯುವ ಸಂದರ್ಭದಲ್ಲಿ ಆನೆಯ ಸೊಂಡಿಲನ್ನು ಶ್ರವಣಾತೀತ ಶಬ್ದ ಚಿತ್ರಣದಿಂದ (ultrasonic sound imaging) ಗಮನಿಸಿದರು. ಅಲ್ಲಿ ಅವರಿಗೆ ಅಚ್ಚರಿ ಮುಂಬಾಗಿಲಲ್ಲೇ ಕಾದಿತ್ತು. ಏಕೆಂದರೆ ಆನೆ ನಮ್ಮ ನಿಮ್ಮ ಹಾಗೆ ನೀರನ್ನು ಹೀರಿಕೊಳ್ಳಲಿಲ್ಲ. ಆನೆ ಸೊಂಡಿಲಿನಲ್ಲಿ ನೀರನ್ನು ಹೀರುವಾಗ ಅನೆಯ ಸೊಂಡಿಲಿನ ಒಳಭಾಗದ ಜಾಗ ಹೆಚ್ಚಾಯಿತು. 5 ಲೀ ಹಿಡಿಸುವಷ್ಟು ಇದ್ದ ಜಾಗ ಮೊದಲಿಗಿಂತ 60% ಹೆಚ್ಚಾಯಿತಂತೆ. ಅಂದರೆ ಸುಮಾರು 8 ಲೀ ನೀರು ಹಿಡಿಸುವಷ್ಟು ಜಾಗ. ಇದರಿಂದಾಗಿ ಆನೆ ನೀರನ್ನು ವೇಗವಾಗಿ ಎಳೆದುಕೊಳ್ಳುತ್ತಿತ್ತು. ಹೆಚ್ಚು-ಕಡಿಮೆ 4 ಲೀ ಪ್ರತೀ ಸೆಕೆಂಡಿನ ವೇಗದಲ್ಲಿ ಹೀರಿಕೊಳ್ಳುತ್ತಿತ್ತು. ಅಂದರೆ ಈಗಿನ ಸ್ನಾನ ಗೃಹದಲ್ಲಿ ಮೇಲಿಂದ ಮಳೆಯ ಹಾಗೆ ನೀರು ಬೀಳುವ ಜರಡಿಯಂತಹ, 24 ಜರಡಿಗಳಲ್ಲಿ ಒಂದೇ ಬಾರಿಗೆ ನೀರು ಬೀಳುವ ರಭಸದಷ್ಟು ಇರುತ್ತದೆ ಎಂದು ಅಂದಾಜಿಸಬಹುದು.



ಇದು ಒಂದಾದರೆ, ಆನೆಗೆ ತಿನ್ನುವ ವಸ್ತು ಕೊಟ್ಟಾಗ ನಾವು ಗಮನಿಸಿರುವ ಹಾಗೆ, ಸೊಂಡಿಲಿನ ತುದಿಯಿಂದ ಹಿಡಿದುಕೊಂಡು ಬಾಯಿಗೆ ಇಟ್ಟುಕೊಳ್ಳುತ್ತದೆ ಅಲ್ಲವೇ... ಹಾಗೆಯೇ ನಮ್ಮ ಊಹೆಯಂತೆಯೇ ಸಂಶೋಧನೆಯಲ್ಲಿ ಆನೆಗೆ ನೀಡಿದ ಒಂದೆರೆಡು ಬೀಟ್ ರೂಟ್ ನಂಥಹ ಗಡ್ಡೆಗಳನ್ನು ಆನೆ ಅದೇ ರೀತಿಯಲ್ಲಿ ತೆಗೆದುಕೊಂಡಿತು. ಮುಂಚಿನ ಹಾಗೆ ಆನೆ ಸೊಂಡಿಲಿನ ಒಳಗಿನ ಜಾಗವೇನು ಬದಲಾಗಲಿಲ್ಲ. ಆದರೆ, ಅದೇ ಗಡ್ಡೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಕೊಟ್ಟಾಗ ಅವು ತೆಗೆದುಕೊಂಡ ಬಗೆ ತಿಳಿದು ನನಗೂ ಅಚ್ಚರಿಯಾಯ್ತು. ಹೌದು, ಹೆಚ್ಚಿನ ಸಂಖ್ಯೆಯಲ್ಲಿದ್ದ ಗಡ್ಡೆಗಳನ್ನು ತೆಗೆದುಕೊಳ್ಳಲು ಅವು ಸೊಂಡಿಲಿನೊಳಗೆ ಗಾಳಿಯನ್ನು ವೇಗವಾಗಿ ಎಳೆದುಕೊಳ್ಳುತ್ತಾ ನಿರ್ವಾತವನ್ನು ಸೃಷ್ಟಿಸಿದವು. ಆ ನಿರ್ವಾತದಿಂದ ಗಡ್ಡೆಗಳು ಗಾಳಿಯಲ್ಲಿ ಮೇಲಕ್ಕೆ ಎದ್ದವು, ಅದನ್ನು ಸೊಂಡಿಲಿನಲ್ಲಿ ಹಿಡಿದು ಸ್ವಾಹಾ ಮಾಡಿದವಂತೆ. ಅವುಗಳು ಸೊಂಡಿಲಿನಲ್ಲಿ ಗಾಳಿಯನ್ನು ಎಳೆದ ರಭಸವನ್ನು ನೀರು ಎಳೆದ ರಭಸದ ಸಹಾಯದಿಂದ ಲೆಕ್ಕ ಹಾಕಿದರು. ಸೊಂಡಿಲಿನಲ್ಲಿ ಗಾಳಿಯ ವೇಗ ಎಷ್ಟಿತ್ತು ಗೊತ್ತೇನು...? ಬರೋಬ್ಬರಿ 150 ಮೀಟರ್ ಪ್ರತೀ ಸೆಕೆಂಡಿನ ವೇಗದಲ್ಲಿ! ಅಂದರೆ ಸುಮಾರು 540 ಕಿ. ಮೀ. ಪ್ರತೀ ಘಂಟೆಯ ವೇಗ! ಮಾನವ ತಯಾರಿಸಿರುವ ಪ್ರಪಂಚದ ಅತ್ಯಂತ ವೇಗದಲ್ಲಿ ಚಲಿಸುವ ಕಾರಿನ ವೇಗ (435 ಕಿ. ಮೀ. ಪ್ರತೀ ಘಂಟೆಯ ವೇಗ) ಕ್ಕಿಂತಲೂ ಹೆಚ್ಚು. ನಾವು ಸೀನುವಾಗ ನಮ್ಮ ನಾಸಿಕದಿಂದ ಗಾಳಿ ಹೊರಡುವ ವೇಗಕ್ಕಿಂತ 30 ಪಟ್ಟು ಹೆಚ್ಚು ವೇಗದಲ್ಲಿ. ಆನೆಯ ಸೊಂಡಿಲೊಳಗಿನ ಇಂತಹ ವಿದ್ಯಮಾನವನ್ನು ಕಂಡುಹಿಡಿದ ನಮ್ಮ ವಿಜ್ಞಾನಿ/ಇಂಜಿನಿಯರುಗಳ ತಂಡ ಅದನ್ನು ನಮ್ಮ ದಿನನಿತ್ಯದ ಬಳಕೆಗೆ ಹೇಗೆ ಬಳಸಿಕೊಳ್ಳಬಹುದೆಂಬ ಹುಡುಕಾಟದಲ್ಲಿದ್ದಾರೆ.

ನಾಗರ ಹಾವು ನುಸುಳಿದಂತೆ, ಬಳ್ಳಿ ಬಳುಕುವಂತೆ ನುಲಿಯುವ ಆನೆಯ ಸೊಂಡಿಲಿನ ನಳಿಕೆಯಲ್ಲೇ ಅಡಗಿರುವ ಇಂತಹ ಅಚ್ಚರಿಯ ಸಂಗತಿಗಳನ್ನು ನಾವು ತಿಳಿಯಲು ಇಷ್ಟು ಸಾವಿರ ವರ್ಷಗಳು ಬೇಕಾಯಿತು. ಹಾಗಾದರೆ ಇಂತಹ ವಿಸ್ಮಯ ಜಗತ್ತನ್ನೇ ಕೋಟ್ಯಾಂತರ ವರ್ಷಗಳಿಂದ ಹೊತ್ತು ನಿಂತಿರುವ ಭೂಮಿಯ ನಿಗೂಢತೆಯನ್ನು ಅರಿತವರಾರು?

**ಮೂಲ ಲೇಖನ:** ScienceNewsforStudents

**ವೀಡಿಯೋ ವೀಕ್ಷಿಸಲು ಇದನ್ನು ಸ್ಕ್ಯಾನಿಸಿ.**



**ಲೇಖನ:** **ಜೈಕುಮಾರ್ ಆರ್.**
**ಡಬ್ಲ್ಯೂ. ಸಿ. ಜಿ. ಬೆಂಗಳೂರು ಜಿಲ್ಲೆ**

# ಜಗದ ಉಸಿರು

ಕಾಡಿನಿಂದ ನಾಡಿಗೆಲ್ಲ
ಬರದು ಬರದ ಛಾಯೆ
ಕಾಡಿನಲ್ಲಿ ಜಗವು ಹಲವು
ಕಂಡು ಕಾಣದಿಹ ಮಾಯೆ...

ಹಣ್ಣು ಕಾಯಿ ಹೂ ಗಿಡಗಳು
ಮರಗಳೆನಿತು ಪೇಳಲಿ
ಜಿಂಕೆ ಮೊಲ ಸರೀಸೃಪಗಳು
ವನ್ಯ ಮೃಗಗಳ ಗೂಡಲಿ...

ಬಣ್ಣ ಹಸಿರು ಹೇಳಲೆನಿತು
ಕಾಡು ಜೀವ ಜಗದ ಉಸಿರು
ಸಸಿಯನೆಟ್ಟು ನಾವು ನೀವು
ನಾಳೆಗೆ ಉಳಿಸುವ ಹಸಿರು...

ಸಂಗಮನಾಥ ಪಿ. ಸಜ್ಜನ
ಕಲ್ಬುರ್ಗಿ ಜಿಲ್ಲೆ

# ಪ್ರಕೃತಿ ಬಿಂಬ



**ವಾಯ್ನಾಡ್ ಪೊದೆಗಪ್ಪೆ** © ವಿಪಿನ್ ಬಾಳಿಗಾ ಬಿ. ಎಸ್.

ವಾಯ್ನಾಡ್ ಪೊದೆಗಪ್ಪೆ (Wayanad Bush frog) ಕೇರಳ, ಕರ್ನಾಟಕ ಮತ್ತು ತಮಿಳುನಾಡಿನಲ್ಲಿ ಸ್ಥಳೀಯವಾಗಿ ಕಂಡುಬರುವ ಈ ಕಪ್ಪೆಗಳನ್ನು ವೈಜ್ಞಾನಿಕವಾಗಿ Pseudophilautus wynaadensis ಎಂದು ಕರೆಯುತ್ತಾರೆ. ಇವು ರಾಕೋಫೋರಿಡೆ (Rhacophoridae) ಕುಟುಂಬಕ್ಕೆ ಸೇರುತ್ತವೆ. ನಿಶಾಚರ ಜೀವಿಯಾದ ಈ ಕಪ್ಪೆಯು ಕಾಡು, ಪೊದೆ ಮತ್ತು ನಗರ ಪ್ರದೇಶಗಳಲ್ಲಿ ಯಥೇಚ್ಛವಾಗಿ ಕಾಣಸಿಗುತ್ತದೆ. ದೇಹವು ತೆಳ್ಳಗಿದ್ದು, ಮೊನಚಾದ ಮೂಗಿನ ಮೇಲೆ ತ್ರಿಕೋನಾಕೃತಿಯ ಬಿಳಿ ಮಚ್ಚೆಯನ್ನು ಹೊಂದಿದೆ ಹಾಗೂ ಗಂಟಲು ತಿಳಿ ಬೂದು ಮಿಶ್ರಿತ ಹಳದಿ ಬಣ್ಣದ ಮಚ್ಚೆಗಳನ್ನು ಹೊಂದಿದೆ. ಈ ಕಪ್ಪೆಗಳು ತಮ್ಮ ಮೊಟ್ಟೆಗಳನ್ನು ತೇವಾಂಶವಿರುವ ಪ್ರದೇಶಗಳಲ್ಲಿ ಇಡುತ್ತವೆ ಹಾಗೂ ಜೀವನ ಚಕ್ರದಲ್ಲಿ ಗುದಮೊಟ್ಟೆ ಮರಿ (tadpole) ಹಂತವಿಲ್ಲದಿರುವುದು ವಿಶೇಷವಾಗಿದೆ.



**ಕೂರ್ಗ್ ಹಳದಿ ಪೊದೆಗಪ್ಪೆ** © ವಿಪಿನ್ ಬಾಳಿಗಾ ಬಿ. ಎಸ್.

ಕೂರ್ಗ್ ಹಳದಿ ಪೊದೆಗಪ್ಪೆ (Coorg yellow bush frog) ಕರ್ನಾಟಕದ ಪಶ್ಚಿಮ ಘಟ್ಟಗಳ ನಿತ್ಯ ಹರಿದ್ವರ್ಣ ಕಾಡುಗಳಲ್ಲಿ ಹಾಗು ಕಾಫಿ ಮತ್ತು ಟೀ ತೋಟಗಳಲ್ಲಿ ಕಂಡುಬರುವ ಈ ಕಪ್ಪೆಗಳನ್ನು ವೈಜ್ಞಾನಿಕವಾಗಿ Raorchestes luteolus ಎಂದು ಕರೆಯುತ್ತಾರೆ. ಕೂರ್ಗ್ ಹಳದಿ ಪೊದೆಗಪ್ಪೆಗಳು ರಾಕೋಫೋರಿಡೆ (Rhacophoridae) ಕುಟುಂಬಕ್ಕೆ ಸೇರುತ್ತವೆ. ಚೂಪಾದ ಮೂಗು ಹಾಗು ನೀಲಿ ಬಣ್ಣದಿಂದ ಸುತ್ತುವರಿದ ಸುವರ್ಣ ಹಳದಿ ಬಣ್ಣದ ಕಣ್ಣುಗಳಿದ್ದು, ಮೈಬಣ್ಣವು ಹಳದಿ ಅಥವಾ ಹಳದಿ ಮಿಶ್ರಿತ ಕಂದು ಬಣ್ಣದ್ದಾಗಿರುತ್ತದೆ. ಕಂದು ಬಣ್ಣದ ಚುಕ್ಕೆಗಳನ್ನು ಮತ್ತು ಮಸುಕಾದ ನಿರಂತರ ರೇಖೆಗಳನ್ನು ಹೊಂದಿರುತ್ತದೆ.



**ಸಣ್ಣ ತೇಲುಕಪ್ಪೆ** **© ವಿಪಿನ್ ಬಾಳಿಗಾ ಬಿ. ಎಸ್.**

ಸಣ್ಣ ಮರಗಪ್ಪೆ (Small tree frog) ಕೇರಳ ಮತ್ತು ಕರ್ನಾಟಕದ ಪಶ್ಚಿಮ ಘಟ್ಟಗಳ ವಿವಿಧ ಭಾಗಗಳಲ್ಲಿ ಮತ್ತು ಕಾಫಿ ತೋಟಗಳಲ್ಲಿ ಕಂಡುಬರುವ ಈ ಕಪ್ಪೆಗಳನ್ನು ವೈಜ್ಞಾನಿಕವಾಗಿ Rhacophorus lateralis ಎಂದು ಕರೆಯುತ್ತಾರೆ. ಮತ್ತು ಇವುಗಳು ರಾಕೋಫೋರಿಡೆ (Rhacophoridae) ಕುಟುಂಬಕ್ಕೆ ಸೇರುತ್ತವೆ. ಮರಗಳ ಮೇಲೆ ವಾಸಿಸುವ ಇವುಗಳು ತಮ್ಮ ಮೊಟ್ಟೆಗಳನ್ನು ಎಲೆಗಳ ಮೇಲೆ ಇಡುತ್ತವೆ. ಚುಕ್ಕೆಗಳನ್ನೊಳಗೊಂಡ ಹಸಿರು ಅಥವಾ ಕಂದು ಮೇಲ್ಮೈ ಹಾಗೂ ಮೂಗಿನ ಹೊಳ್ಳೆಯಿಂದ ದೇಹದ ಮೇಲ್ಭಾಗದ ಎರಡೂ ಬದಿಯಲ್ಲಿ ಹಳದಿ ಗೆರೆಯಿರುವುದು ವಿಶಿಷ್ಟವಾಗಿದೆ. ಒತ್ತಡಕ್ಕೆ ಒಳಗಾದಾಗ ತಮ್ಮ ಬಣ್ಣವನ್ನು ಬದಲಾಯಿಸುವುದನ್ನು ಕಾಣಬಹುದಾಗಿದೆ.



**ಹಳದಿ ಕಪ್ಪೆ** © ವಿಪಿನ್ ಬಾಳಿಗಾ ಬಿ. ಎಸ್.

Golden-backed frog (ಹಳದಿ ಬೆನಿನ್ನ ಕಪ್ಪೆ) ಭಾರತದ ಪಶ್ಚಿಮ ಘಟ್ಟಗಳಿಗೆ ಸ್ಥಳೀಯವಾಗಿರುವ ಈ ಕಪ್ಪೆಗಳನ್ನು ವೈಜ್ಞಾನಿಕವಾಗಿ Indosylvirana sp ಎಂದು ಕರೆಯುತ್ತಾರೆ. ಇವುಗಳನ್ನು ರಾನಿಡೇ (Ranidae) ಕುಟುಂಬಕ್ಕೆ ಸೇರಿಸಲಾಗಿದೆ. ನಿತ್ಯಹರಿದ್ವರ್ಣ ಕಾಡುಗಳು, ಬಿದಿರಿನ ಪೊದೆಗಳು, ಕರಾವಳಿ ಪ್ರದೇಶಗಳು ಮತ್ತು ಭತ್ತದ ಗದ್ದೆಗಳು ಸೇರಿದಂತೆ ವಿವಿಧ ರೀತಿಯ ಆವಾಸ ಸ್ಥಾನಗಳಲ್ಲಿ ಕಂಡುಬರುತ್ತವೆ. ಈ ಕಪ್ಪೆಯ ಹಿಂಭಾಗವು ಕಿತ್ತಳೆ ಅಥವಾ ಕಂದು ಬಣ್ಣದ್ದಾಗಿದ್ದು, ಕಪ್ಪು ಅಥವಾ ಕಂದು ಬಣ್ಣದ ಚುಕ್ಕೆಗಳನ್ನೊಳಗೊಂಡು ನಯವಾಗಿರುತ್ತದೆ. ಎರಡೂ ಬದಿಗಳಲ್ಲಿ ಅಗಲವಾದ, ಗಾಢ ಕಂದು ಬಣ್ಣದ ಪಟ್ಟಿಯು ಮೂಗಿನ ಹೊಳ್ಳೆಗಳಿಂದ ಹಿಂಭಾಗಕ್ಕೆ ಸಾಗುತ್ತದೆ. ಬೆರಳುಗಳ ತುದಿಗಳು ವಿಸ್ತಾರವಾದ ತಟ್ಟೆಗಳನ್ನು ಹೊಂದಿರುತ್ತವೆ.

.

**ಚಿತ್ರ:** ವಿಪಿನ್ ಬಾಳಿಗಾ ಬಿ. ಎಸ್.

**ಲೇಖನ:** ದೀಪ್ತಿ ಎನ್.

# ನೀವೂ ಕಾನನಕ್ಕೆ ಬರೆಯಬಹುದು



© CC BY – SA 4.0

ತನ್ನ ಗಾಂಭೀರ್ಯ, ಶೌರ್ಯ, ಶಕ್ತಿಯಿಂದಾಗಿ ಸಿಂಹವನ್ನು "ಕಾಡಿನ ರಾಜ" ಎಂದು ಕರೆಯಲಾಗುತ್ತದೆ. ಸಿಂಹಗಳು ದಟ್ಟವಾದ ಅರಣ್ಯದಲ್ಲಿ ಇರುವುದಿಲ್ಲ. ಬದಲಿಗೆ ಕಲ್ಲು ಬಂಡೆಗಳು, ಹುಲ್ಲುಗಾವಲು ಹಾಗೂ ಕುರುಚಲು ಗಿಡಗಳ ಕಾಡಿನಲ್ಲಿ ವಾಸಿಸುತ್ತವೆ. ಭಾರತದಲ್ಲಿ ಗುಜರಾತಿನ ಗಿರ್ ಅರಣ್ಯದಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಇವುಗಳು ಗುಂಪಿನಲ್ಲೇ ಇರುತ್ತವೆ. ಒಂದು ಗುಂಪಿನಲ್ಲಿ ಸುಮಾರು 15 ಸಿಂಹಗಳಿರುತ್ತವೆ. ಇವುಗಳು ಸಾಮಾನ್ಯವಾಗಿ ಹಗಲಿನಲ್ಲಿ ಮಲಗಿದ್ದು, ರಾತ್ರಿಯ ವೇಳೆ ಬೇಟೆಯಾಡುತ್ತವೆ. ಹೆಚ್ಚಾಗಿ ಹೆಣ್ಣು ಸಿಂಹಗಳು ಬೇಟೆಯಾಡುತ್ತವೆ. ಸಿಂಹಿಣಿಗಳು ಗರ್ಭಧರಿಸಿದ ಮೂರು ತಿಂಗಳಲ್ಲಿ ಮಕ್ಕಳಿಗೆ ಜನ್ಮ ನೀಡುತ್ತವೆ. ಒಂದು ಸಿಂಹದ ಜೀವಿತಾವಧಿ 15-16 ವರ್ಷವಷ್ಟೇ. ಅರಣ್ಯ ನಾಶ, ಕಾಡು ಪ್ರಾಣಿಗಳ ಬೇಟೆ ಈ ಎಲ್ಲಾ ಕಾರಣಗಳಿಂದಾಗಿ ಕಾಡಿನ ರಾಜ ಎಂದು ಕರೆಯಲ್ಪಡುವ ಸಿಂಹಗಳ ಸಂಖ್ಯೆ ಕ್ಷೀಣಿಸುತ್ತಿದೆ. ಕುಸಿಯುತ್ತಿರುವ ಸಿಂಹಗಳ ಸಂಖ್ಯೆಯ ಕುರಿತು ಜಾಗೃತಿ ಮೂಡಿಸಲು **"ವಿಶ್ವ ಸಿಂಹ ದಿನ"** ವನ್ನು ಆಗಸ್ಟ್ 10 ರಂದು ಆಚರಿಸಲಾಗುವುದು. ಇದೇ ರೀತಿಯ ವಿಶೇಷ ಮಾಹಿತಿಗಳನ್ನು ಹಂಚಿಕೊಳ್ಳಲು ನೀವು ಕೂಡ ಕಾನನಕ್ಕೆ ಬರೆಯಬಹುದು.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com
**ಅಂಚೆ ವಿಳಾಸ**:

ವೈಲ್ಡ್ ಲೈಫ್ ಕನ್ಸರ್ವೇಷನ್ ಗ್ರೂಪ್,
ಅಡವಿ ಫೀಲ್ಡ್ ಸ್ಟೇಷನ್,
ಒಂಟಿಮಾರನ ದೊಡ್ಡಿ,
ರಾಗಿಹಳ್ಳಿ ಅಂಚೆ,
ಆನೇಕಲ್ ತಾಲ್ಲೂಕು,
ಬೆಂಗಳೂರು ನಗರ ಜಿಲ್ಲೆ,
ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.